# ಕಾನನ

## ನಿಸರ್ಗದೆಡೆಗೆ ಪಯಣ

ಡಿಸೆಂಬರ್ ೨೦೧೪



ಕಾನನ ಪತ್ರಿಕೆಯು ನಾಲ್ಕನೇ
ವರ್ಷಾಚರಣೆ ವಿಶೇಷ
ಪುಟ : ೧೦

BANNERUGHATTA

**WILDLIFE CONSERVATION GROUP**

# ಕಾನನ

## ನಿಸರ್ಗದೆಡೆಗೆ ಪಯಣ


**ಸಂಪಾದಕೀಯ**

ಅಶ್ವಥ ಕೆ.ಎನ್

**ಲೇಖನ ವೃಂದ**

ಸ್ವಾಮಿ ಸೌಖ್ಯಾನಂದಜೀ ಮಹಾರಾಜ್

ಅಶ್ವಥ ಕೆ.ಎನ್

ಶಂಕರಪ್ಪ ಕೆ.ಪಿ

ಶ್ವೇತಾ .ಎಂ

ಮಹದೇವ ಕೆ.ಸಿ

ಧನರಾಜ್ .ಎಂ

**ಕರಡು ತಿದ್ದುಪಡಿ**

ಮುರಳಿ ಎಸ್

**ವಿನ್ಯಾಸ**

ನಾಗೇಶ್ ಓ .ಎಸ್

**ಛಾಯಾಚಿತ್ರ**

ಕಾರ್ತಿಕ್ ಎ.ಕೆ

**ಇ–ವಿಳಾಸ**

kaanana.mag@gmail.com

www.issuu.com/kaanana


**ಮುಖಪುಟ**

ಹುಲಿ


WILDLIFE
CONSERVATION
GROUP
































# ಸಂಪಾದಕೀಯ



ಹುಲಿ ನಮ್ಮ ರಾಷ್ಟ್ರಪ್ರಾಣಿ, ಆದರೆ ನಮ್ಮ ದೇಶದಲ್ಲಿಯೇ ಹುಲಿಗಳ ಸಂತತಿ ಅಳಿವಿನಂಚಿನಲ್ಲಿರುವುದು ಖೇದ ತರುವಂತಹಾ ಸಂಗತಿ. ಮಿತಿಮೀರಿ ಬೆಳೆಯುತ್ತಿರುವ ಔದ್ಯೋಗಿಕರಣ ಹಾಗೂ ಆಸ್ಫೋಟಗೊಳ್ಳುತ್ತಿರುವ ಜನಸಂಖ್ಯೆಯಿಂದಾಗಿ ಕಾಡಿನೊಂದಿಗೆ ಮಾನವನ ಸಂಘರ್ಷದಿಂದಾಗಿ ವನ್ಯಮೃಗಗಳು ಹಳ್ಳಿಗಳ ದಾರಿಹಿಡಿದಿವೆ.  ಹಿಂದೆಂದೋ ಆನೆಗಳ ಜಾಡಾಗಿದ್ದದ್ದು, ಇಂದು ವಿಪರೀತ ನಗರವಾದರೆ ಅದು ಮಾನವರಾದ ನಮ್ಮ ತಪ್ಪೇ ಹೊರತು ಆನೆಗಳದಲ್ಲ. ಹಾಗೆ ಕಾಡಿನ ಒತ್ತುವರಿಯಿಂದ ಕಾಡಂಚಿನ ಹಳ್ಳಿಗೆ ಆಹಾರವನ್ನರಸಿ ಬಂದ ಹುಲಿಯನ್ನ ಹೆದರಿಸಿದವರ ಮೇಲೆರೆಗಿದ್ದರಿಂದ, ಆ ಹುಲಿಯನ್ನು "ನರಭಕ್ಷಕ" "ವ್ಯಾಘ್ರ" ಎಂದು ಬಿಂಬಿಸಿ ಅದನ್ನೇ ಬಂಡವಾಳ ಮಾಡಿಕೊಂಡ ನಾವು, ಹುಲಿಗಳ ಆವಾಸಕ್ಕೆ ಹಾನಿಯಾಗುತ್ತಿದ್ದರೂ ತಿಳಿದೂ ಜಾಣಕುರುಡನ್ನು ಪ್ರದರ್ಶಿಸಿದ್ದೇನು? ಗದ್ದುಗೆಯಲ್ಲಿ ಕುಳಿತ ಮೇಧಾವಿ ಜನ ಹುಲಿಯನ್ನು ಕಂಡಲ್ಲಿ ಗುಂಡಿಕ್ಕಿ ಎಂದು ಆರ್ಭಟಿಸಿದ್ದೇನು? ಆದರೆ ಕಾಡಿನ ಆರೋಗ್ಯಾವಸ್ಥೆಯ ಪ್ರಮುಖ ಕೊಂಡಿಯೊಂದು ಬೇಟೆಗಾರನ ಟ್ರಾಪಗೋ೯, ಬಂದೂಕಿನ ಗುಂಡಿಗೋ, ಬಲಿಯಾಗುತ್ತಿರುವುದು ಅಪಾಯದ ಮುನ್ಸೂಚನೆಯೇ ಸರಿ.

೧೯೨೦ರ ಹುಲಿ ಗಣತಿಯ ಪ್ರಕಾರ ಭಾರತದಲ್ಲಿನ ಹುಲಿಗಳ ಸಂಖ್ಯೆ ಬರೋಬರಿ ಒಂದು ಲಕ್ಷ ಎಂದು ಅಂದಾಜಿಸಲಾಗಿದೆ, ಆದರೆ ಈಗ ಒಂದು ಸಾವಿರಕ್ಕೆ ಬಂದಿಳಿದಿದೆ. ಇದೇ ಡಿಸೆಂಬರಿನಲ್ಲಿ ಹುಲಿಗಣತಿ ನಡೆದಿದ್ದು ನಮ್ಮ ಕರ್ನಾಟಕದಲ್ಲಿನ ಹುಲಿಗಳ ಸಂಖ್ಯೆ ಇನ್ನೇನು ತಿಳಿಯಬಹುದಾಗಿದೆ. ಕಾಟಾಚಾರಕ್ಕೆಂದು ಮಾಡುವಂತಿರುವ ಈ ಗಣನೆಯ ನಿಖರತೆ ಯಾವಾಗಲೂ ವಿವಾದಾಸ್ಪದ. ಅತ್ಯಂತ ನಿಖರ ತಂತ್ರಜ್ಞಾನವಿದ್ದರೂ, ಬೇಕಾದ ಸಂಪನ್ಮೂಲ, ಬೇಕಾದಷ್ಟು NGO ಗಳು ಇದ್ದರೂ, ಲೆಕ್ಕವಿಲ್ಲದಷ್ಟು ಹಣ ಇದ್ದರೂ, ಯಾವುದಕ್ಕೂ ಯಾವುದೇ ಕೊರತೆ ಇಲ್ಲದಿದ್ದರೂ ತುಚ್ಛ ಮನಸ್ಸಿನ ನಮ್ಮ ಯೋಚನೆಗಳಲ್ಲಿ ಜೀವಸಂಕುಲ ಮುಳುಗಿವೆ. DNA ತಂತ್ರಜ್ಞಾನ ಉಪಯೋಗಿಸದೆ, ಇನ್ನೂ ಹುಲಿ ಲದ್ದಿಗೆ ಕೈಹಾಕುವ ಪರಿಪಾಠ, ಒಂದು ಹುಲಿ ನೋಡಿದರೆ ಕೆಲಸ ಹೋಗುತ್ತದೆಂಬ ಭಯಕ್ಕೆ ಮೂರು ಹುಲಿನೋಡಿದೆವೆಂದು ಬರಿಯುವ ಲೆಕ್ಕ ಇತ್ಯಾದಿಗಳಿಂದ ಇರುವವು ಸಾವಿರ ಹುಲಿಗಳೇ ಎಂಬುದು ಅನುಮಾನಾಸ್ಪದ?. ಹುಲಿಗಳ ಸಂಖ್ಯೆಯ ಏರುಪೇರಿಗೆ ನಾವೇ ನೇರ ಹೊಣೆಗಾರರಾಗಿದ್ದೇವೆ. ಮಿತಿಮೀರಿ ಬೆಳೆದ ಜನಸಂಖ್ಯೆ, ಉದ್ದಗಲಕ್ಕೂ ಹಿಗ್ಗುತಿರುವ ನಗರಗಳು. ಇದರಿಂದಾದ ಆಹಾರ ಮತ್ತು ವಸತಿ ಅಭಾವ ಇದೆಲ್ಲದರ ನೇರ ಪರಿಣಾಮ ಅರಣ್ಯದ ಮೇಲೆ ಬಿದ್ದಿದೆ. ಅದಲ್ಲದೇ ಕಾಡಿನಲ್ಲಿರುವ ಸಂಪತ್ತಿನ ಲೂಟಿ, ಕಾಡುಮರಗಳ ಮಾರಣ ಹೋಮದಿಂದಾಗಿ ವನ್ಯಮೃಗಗಳ ಆವಾಸಕ್ಕೆ ತೊಂದರೆ ಉಂಟಾಗಿದೆ. ಇದಲ್ಲದೇ ಕೇವಲ ಹಣಕ್ಕಾಗಿ ಹುಲಿಗಳಂತಾ ಹಲವು ವನ್ಯಪ್ರಾಣಿಗಳ ಮಾರಣ ಹೋಮವಾಗುತ್ತಿದೆ.

ಹೀಗೆ ಮುಂದುವರೆದರೆ ಮುಂದೊಂದು ದಿನ  ಅತೀ ದೊಡ್ಡ ಆಘಾತವೊಂದು ನಮಗೆಲ್ಲಾ ಕಟ್ಟಿಟ್ಟ ಬುತ್ತಿ ಇದರ  ಮುನ್ಸೂಚನೆಯೇ ಈ ಹುಲಿಗಳ ಸಂಖ್ಯೆ ಕ್ಷೀಣಿಸುತ್ತಿರುವುದು. ಈಗಲಾದರು ಎಚ್ಚೆತ್ತುಕೊಳ್ಳೋಣ, ಅರಣ್ಯ ವನ್ಯಜೀವಿಗಳ ರಕ್ಷಣೆಗೆ  ಸಹಕರಿಸೋಣ, ಇನ್ನೊಬ್ಬರಲ್ಲಿ ಅರಿವು ಮೂಡಿಸೋಣ!.

**ಅರಣ್ಯ, ವನ್ಯಜೀವಿ, ಪರಿಸರ ಸಂರಕ್ಷಣೆ, ವಿಜ್ಞಾನ, ವನ್ಯಜೀವಿ ಛಾಯಾಚಿತ್ರ, ಕವನ, ಕಥೆಗಳು ಹಾಗೂ ಲೇಖನಗಳನ್ನು  ತಾವೂ ಕಾನನಕ್ಕೆ ಬರೆಯಬಹುದು.**

ಇ-ಅಂಚೆ :   kaanana.mag@gmail.com

**Wildlife Conservation Group**



# ಆಧ್ಯಾತ್ಮದಲ್ಲಿ ವನ್ಯಜೀವಿಗಳು

## ಶ್ರೀ ರಾಮಕೃಷ್ಣರ ಉಪದೇಶಗಳಲ್ಲಿ ಪ್ರಾಣಿಪಕ್ಷಿಗಳು

### * ದುಂಬಿಯಿಂದ ಕಲಿತದ್ದು!



ತುಂಬಿದ ಕೊಡ ತುಳುಕುವುದಿಲ್ಲಾ ಎಂಬ ಗಾದೆ ಮಾತಿನಂತೆ ಒಬ್ಬ ಪರಿಪೂರ್ಣ ವ್ಯಕ್ತಿ ಎಂದೂ ತಾನು ತಿಳಿದ ವಿದ್ಯೆಯನ್ನು ಜಂಬದಿಂದ ಪ್ರದರ್ಶಿಸುವುದನ್ನು ಇಚ್ಚಿಸುವುದಿಲ್ಲ, ಆದರೆ ಅಪಕ್ವವಾದ ಅರೆ ತಿಳಿದವ್ಯಕ್ತಿಗಳು ತಾವು ತಿಳಿದದ್ದು ಅಲ್ಪವಾದರು ದೊಡ್ಡ ಮೇಧಾವಿಗಳಂತೆ ತಮ್ಮ ವಿದ್ಯಾಪಾರಂಗತೆಯನ್ನು ತೋರಲು ಹಾತೊರೆಯುತ್ತಾರೆ. ಇದಕ್ಕೆ ಶ್ರೀರಾಮಕೃಷ್ಣ ಪರಮಹಂಸರು ಸರಳ ಕಥೆಯ ಉದಾಹರಣೆಯೊಂದಿಗೆ ಹೀಗೆ ಹೇಳುತ್ತಾರೆ.



ಒಬ್ಬನಿಗೆ ಇಬ್ಬರು ಮಕ್ಕಳಿರುತ್ತಾರೆ. ಮಕ್ಕಳಿಗೆ ಉತ್ತಮ ವಿದ್ಯಾಭ್ಯಾಸ ಕೊಡಿಸಬೇಕೆಂದಿದ್ದ ತಂದೆ ತನ್ನ ಮಕ್ಕಳನ್ನು ಒಬ್ಬ ಗುರುಗಳ ಬಳಿ ವಿದ್ಯಾಭ್ಯಾಕ್ಕಾಗಿ ಸೇರಿಸುತ್ತಾರೆ, ಹಲವು ವರ್ಷಗಳ ಬಳಿಕ ಗುರುಗಳ ಮನೆಯಿಂದ ಹಿಂತಿರುಗಿ ಬಂದ ಮಕ್ಕಳು, ತಮ್ಮ ತಂದೆಗೆ ನಮಸ್ಕರಿಸುತ್ತಾರೆ. ಆಗ ತಂದೆ ಅವರ ಜ್ಞಾನದ ಆಳವನ್ನು ಅರಿಯಬೇಕೆಂದು ಹಿರಿಯವನನ್ನು "ಮಗು ನೀನು ಎಲ್ಲಾ ಶಾಸ್ತ್ರಗಳನ್ನು ಓದಿರುವೆ ಬ್ರಹ್ಮ ಸ್ವರೂಪ ಏನೆಂಬುದನ್ನು ಹೇಳು" ಎಂದರು. ಆಗ ಹಿರಿಯ ಮಗ ಶಾಸ್ತ್ರವಾಕ್ಯಗಳನ್ನು ಉದಾಹರಿಸಿ ಬ್ರಹ್ಮವನ್ನು ವಿವರಿಸತೊಡಗಿದ, ತಂದೆ ಏನು ಹೇಳದೆ ಕಿರಿಯ ಮಗನಿಗೆ ಅದೇ ಪ್ರಶ್ನೆ ಹಾಕಿದರು. ಆದರೆ ಹುಡುಗ ಮೌನವಾಗಿ ತಲೆ ತಗ್ಗಿಸಿ ನಿಂತ ಅವನ ಬಾಯಿಂದ ಒಂದು ಮಾತು ಹೊರಡಲಿಲ್ಲ. ತಂದೆಗೆ ತುಂಬಾ ಸಂತೋಷವಾಗ "ಮಗು ಬ್ರಹ್ಮನ ವಿಷಯ ನೀನು ಸ್ವಲ್ಪ ಅರಿತಿರುವೆ, ಅವನು ಏನಾಗಿರುವನೋ ಅದನ್ನು ಮಾತಿನ ಮೂಲಕ ವ್ಯಕ್ತ ಪಡಿಸಲು ಆಗುವುದಿಲ್ಲ" ಎಂದು ಹೇಳಿ, ದುಂಬಿಯು ಮಕರಂಧವನ್ನು ಹೀರುವಾಗ ಝೇಂಕರಿಸುವುದಿಲ್ಲಾ, ತಲ್ಲೀನವಾಗಿ ಹೀರುವುದರಲ್ಲಿ ಮಗ್ನವಾಗುವುದು, ಆದರೆ ಜೇನು ಸಿಗದಿರುವ ದುಂಬಿ ಶಬ್ಧಮಾಡುತ್ತಾ ಅಲೆಯುವುದು ಎಂದು ಹೇಳಿದರು.



- ಸ್ವಾಮಿ ಸೌಖ್ಯಾನಂದಜೀ ಮಹಾರಾಜ್



# ಹಕ್ಕಿಲೋಕ

**ಇಂಗ್ಲೀಷ್ ಹೆಸರು : Collared Scops Owl**

**ವೈಜ್ಞಾನಿಕ ಹೆಸರು : *Ctus bakkamoena***

ನಾವು ಸ್ವಲ್ಪ ಜನ, ಸುಮಾರು ವರುಷಗಳಿಂದ ಬರ್ಡ್ ವಾಚಿಂಗ್, ಪೊಟೋಗ್ರಫಿ ಅಂಥ ಸುತ್ತಾಡುತ್ತಾ ಇರುತ್ತೇವೆ, ಅಂದ್ರೆ ನಮ್ದೆ ಒಂದು ಸಣ್ಣ ಗುಂಪು. ಗುಂಪಿನಲ್ಲಿ ಯಾರ್ಗೂ ಸಿಗದೆ ಇರೋ ಗೂಬೆಗಳು ನಂಗೆ ಸಿಗೋದು ಅಂದ್ರೆ ಅದು ನನ್ನ ಅದೃಷ್ಟನೋ ಅಥವಾ ಅವರ ದುರದೃಷ್ಟನೋ ನಂಗೆ ಗೊತ್ತಿಲ್ಲ. ಆದ್ರೆ ಇದೊಂದು ಮಾತ್ರ ನಿಜ, ನಂಗೆಬಿಟ್ಟು ಅವರ ಯಾರಿಗೂ ಗೂಬೆಗಳು ಪೊಟೋಗ್ರಫಿಗೆ ಸಿಗಲಿಲ್ಲವಲ್ಲ ಎಂಬ ಚಿಂತೆ ಅವರದು. ನಾನು ಮಾತ್ರನೇ ಕೆಲ ಗೂಬೆಗಳ ಪೊಟೋ ತೆಗೆದಿರೋದು. ಅದ್ಕೆ ಶಂಕ್ರ, ನಾಗೇಶ ಎಲ್ಲಾ ಸೇರ್ಕೊಂಡು ನಂಗೆ ಗೂಬೆ ಪೊಟೋಗ್ರಾಫರ್ ಅಂಥ ನಾಮಕರಣ ಮಾಡಿದ್ರು. ಆದ್ರೆ ಇದನ್ನು ಕೇಳಿದ ಜನ ಎಲ್ಲಿ ಆ ಗೂಬೆ ಅಂಥ ನಗ್ತಾರೆ, ಇಲ್ಲ "ಏನ್ ರ್ರೀ. . . ಗೂಬೆ ಪೊಟೋಗ್ರಫರ್ " ಅಂಥ ಅಂಗಿಸ್ತಾರೆ ಬಿಡಿ!.

ನಾನು ಡಿಗ್ರಿಮಾಡ್ಬೇಕಾದ್ರೆ ನಮ್ ಕಾಲೇಜ್ ಹತ್ರ ಒಂದು ಮರದಲ್ಲಿ ಸುಮಾರು ದಿನ, ದಿನಲೂ ಬಾರ್ನ್ ಔಲ್ (Barn Owl) ನೋಡಿದ್ದೀನಿ. ಮತ್ತೆ ಸ್ನೇಹಿತರಿಗೆಲ್ಲ ತೋರಿಸಿದ್ದೀನಿ. ಮತ್ತೆ ಕೊಂಬಿನ ಗೂಬೆಯನ್ನೂ ತುಂಬ ಸಾರಿ ನೋಡಿದ್ದೀನಿ, ಪೊಟೋಗ್ರಫಿ ಕೂಡ ಮಾಡಿದ್ದೀನಿ. ನಮ್ಮ ಹಳ್ಳಿ ವಾಜರಗುಡಿಸಲು ಹತ್ರ, ಕಾಡು ಪಕ್ಕದಲ್ಲೇ ಗುಟ್ಟಗಳಿವೆ, ಅಲ್ಲಿ ತುಂಬ ಈ ಕೊಂಬಿನ ಗೂಬೆಗಳನ್ನು ನೋಡಿ, ಪೊಟೋನೂ ಕೂಡ ತೆಗೆದಿದ್ದೀನಿ. ಈ ಜಾಗದಲ್ಲಿ ಮಾತ್ರ ಈ ಕೊಂಬಿನ ಗೂಬೆಗಳು ತುಂಬ ಇರುತ್ತವೆ. ಅದ್ಕೆ ಈ ಗುಡ್ಡಕ್ಕೆ ಜನ ಗೂಬ್ಗುಟ್ಟೆ ಅಂಥ ಹೆಸರಿಟ್ಟಿದಾರೆ. ಯಾರ್ಬೇಕಾದ್ರು ವಾಜರಗುಡಿಸಲು ಬಳಿ ಬಂದು, ಇಲ್ಲಿ " ಗೂಬ್ಗುಟ್ಟೆ " ಎಲ್ಲಿರೋದು? ಅಂಥ ಕೇಳಿದ್ರೆ ಯಾರ್ಬೇಕಾದ್ರು ಹೇಳ್ತಾರೆ ಬಿಡಿ. ಇನ್ನೋ ಹಾಲಕ್ಕಿ, ಅದೋ ಲೆಕ್ಕಕ್ಕೆ ಇಲ್ಲದಾಗೆ ತುಂಬನೆ ಕಾಣ್ತವೆ. ನಮ್ಮನೆ ಮೇಲೆ ಕೂತ್ರೆ ಸಾಕು!, ರಾತ್ರಿ ಎಲ್ಲಾ ನಾಟಕ ನೋಡೋ ರೀತಿ ಬೆಳಗ್ಗೆವರಿಗೂ ನೋಡ್ತಾ ಇರ್ಬಹುದು ಕಣ್ರೀ.

ಎರಡು ರೀತಿಯ ಗೂಬೆಗಳು ತುಂಬ ಅಪರೂಪಕ್ಕೆ ಕಂಡುಬರುತ್ತವೆ. ಒಂದು ಚುಕ್ಕೆ ಗೂಬೆ (ಮೊಟಲ್ಡ್ ವುಡ್-ಔಲ್), ಮತ್ತೊಂದು ಚಿಟ್ಟ ಗೂಬೆ (ಕಾಲರ್ಡ್ ಸ್ಕಾಪ್ಸ್-ಔಲ್) ಇವೆರಡು ಒಂದೊಂದೆ ಸಾರಿ ನೋಡಿದ್ದು. ಮತ್ತೆ ಇವು ಕಣ್ಣಿಗೆ ಕಾಣಲೇ ಇಲ್ಲ. ಈ ಚುಕ್ಕೆ ಗೂಬೆಯನ್ನು ಒಮ್ಮೆ ಹಳ್ಳಿಯ ಒಂದು ದೊಡ್ಡ ಆಲದ ಮರದಲ್ಲಿ ನೋಡಿದ್ದು, ಸುಮಾರು ಮೂರು-ನಾಲ್ಕು ವರ್ಷಗಳ ಹಿಂದೆ. ಇನ್ನೂ ಚಿಟ್ಟ ಗೂಬೆ ಇದರ ಬಗ್ಗೆ ನಮಗೆ ಏನೂ ತಿಳಿದೂ ಇರಲಿಲ್ಲ, ಎಲ್ಲೂ ನೋಡು ಇರಲಿಲ್ಲ. ಒಂದು ದಿನ, ಅದು ಬೇಸಿಗೆಯ ಮಧ್ಯಭಾಗ, ಮನೆಯಲ್ಲಿ ಕುಳಿತು ಪರೀಕ್ಷೆಗೆ ಓದಿಕೊಳ್ಳುತ್ತಿದ್ದೆ. ಶಂಕ್ರನಿಂದ ಪೋನ್ ಬಂತು. "ಏನ್ ಸಾಮಾಚರ " ಕೇಳಿದೆ. "ಒಂದು ಹೊಸ ಗೂಬೆ ಸಿಕ್ಕಿದೆ ಬೇಗ ಕ್ಯಾಮರ ತಗೋ ಬಾ " ಎಂದ. ತಕ್ಷಣ ಕ್ಯಾಮರವನ್ನು ಹೆಗಲಿಗೇರಿಸಿಕೊಂಡು ಗಾಡಿಯಲ್ಲಿ ಬೂರ್ ಎನ್ನುತ್ತಾ ವಾಜರಗುಡಿಸಲ ಕಡೆ ಹೊರಟೆ.



ಒಂದು ದೈತ್ಯಹಲಸಿನ ಮರದ ಕೆಳಗೆ ಶಂಕ್ರನ ಜೊತೆ ಮಕ್ಕಳು-ಮರಿ ಎಲ್ಲಾ ಒಂದು ಮಂದೆ ಜನ ನಿಂತ್ತಿದ್ರು. ಶಂಕ್ರ ಎಲ್ಲರಿಗೂ ಕೈಸನ್ನೆ ಮಾಡಿ ಮರದ ಯಾವುದೋ ಕೊಂಬೆಯ ಎಲೆಗಳ ನಡುವೆ " ಅಗೋ ಅಲ್ಲಿ!" ಎಂದು ತೋರಿಸುತ್ತಿದ್ದ. ನಾನು ಅವರ ಜೊತೆ ಸೇರಿಕೊಂಡೆ ಹಲಸಿನ ಮರದ ದಟ್ಟ ಎಲೆಗಳ ನಡುವೆ ನೂರಾರು ಕೊಂಬೆಗಳಲ್ಲಿ ಆ ಕೊಂಬೆಯಲ್ಲಿ ನೋಡು ಎಂದ. ಮುಂಚಿನಿಂದ ನೋಡುತ್ತಿದ್ದವರಿಗೆ ಕಾಣಲ್ಲಿಲ್ಲದ ಗೂಬೆ ನಂಗೆ ಹೇಗೆ ಕಾಣಬೇಕು ಹೇಳಿ!. "ಎಲ್ಲಿ ಸರಿಯಾಗಿ ತೋರಿಸೋ ಮಾರಾಯ " ಎಂದೆ. ನಾನು ಎಲ್ಲಾ ಗೂಬೆಗಳಂತೆಯೇ ದೊಡ್ಡ ಗಾತ್ರದ್ದು ಇದು ಕೂಡ ಎಂದು, ನೋಡಲು ಇಷ್ಟುಕಷ್ಟವೇ ಎಂದುಕೊಂಡಿದ್ದೆ. ಸರಿಯಾಗಿ ತೋರಿಸು ಮಾರಾಯ!. ಆದರೆ ನನ್ನ ಊಹೆ ತಪ್ಪಾಗಿತ್ತು. "ಆ ಗೂಬೆ ಬೇರೆ ಗೂಬೆಗಳಂತೆ ದೊಡ್ಡದಲ್ಲ ಗಾತ್ರದಲ್ಲಿ ಗೊರವಂಕ ಗಾತ್ರದ್ದು. ನೋಡಲು ಸ್ವಲ್ಪ ಕಷ್ಟನೇ ಮಾರಾಯ. ನೋಡು ಅಲ್ಲೀ. . .ಬೂದಗೆ, ಸ್ವಲ್ಪ ಕಂದುಗೆ ಇದೆ ಎಂದು ಮತ್ತೆ ಬೆರಳನ್ನು ತೋರಿಸತೊಡಗಿದ, ಆ ಬಲಕ್ಕೆ ಹೋಗಿದೆಯಾಲ್ಲ ಕೊಂಬೆ!, ಆ ಕವಲು ಹೋಡೆದಿರೋ ಹತ್ತಿರ, ಆ ಕೊಂಬೆಯಲ್ಲಿಯೇ ಸ್ವಲ್ಪ ಮುಂದೆ ಹೋದರೆ, ಆ ಎಲೆಗಳ ಕೆಳಗೆ ಇರುವ ಕೊಂಬೆಯ ಮೇಲೆ ಕುಳಿತಿದೆ ನೋಡು " ಎಂದ.

ಆ ಸಂಜೆಯ ಹೊಂಬಿಸಿಲು, ಹಲಸಿನ ಮರದ ಹಣ್ಣೆಲೆಗಳ ನಡುವೆ ಹಲಸಿನ ಎಲೆಗಳಂತೆಯೇ, ಕೊಂಬೆಗೂ ಹಕ್ಕಿಗೂ ವ್ಯತ್ಯಾಸ ಇಲ್ಲದಂತೆಯೇ ಕೊಂಬೆಯ ಖಂಡದಂತೆಯೇ ಕಾಣುವ ಆ ಹಕ್ಕಿ ನಮಗೆ ಎಲ್ಲಿ ಕಾಣಬೇಕು!. ಸದ್ಯಕ್ಕೆ ಕಂಡಿದ್ದು ನಮ್ಮ ಅದೃಷ್ಟ ಬಿಡಿ. ತೇಟ್ ಮೈನಾ ಗಾತ್ರದ ದುಂಡಗಿನ ಕಂದು ಮುಖದ, ಅಂಚು ಕಪ್ಪು ಬಣ್ಣದ್ದು. ಕಣ್ಣು ಕೆಂಪ್ಪಿದ್ದರೂ ಕಣ್ಣಿಗೆ ಸ್ಪಷ್ಟವಾಗಿ ಕಾಣೋದಿಲ್ಲ. ಮೊನಚಾದ ಚಿಕ್ಕ ಕೊಕ್ಕು, ಕೊಕ್ಕಿನ ಇಬ್ಬದಿಯಲ್ಲಿ ಬಿಳಿ ಮೀಸೆಗಳ ನಡುವೆ ಅವಿತುಕೊಂಡಿದೆ. ಸಣ್ಣ ಕರುಗಳಿಗೆ ಇರುವಂತೆ ಎರಡು ಪುಟಾಣಿ ಕಂದು ಮಿಶ್ರಿತ ಕೊಂಬುಗಳು ಇವೆ. ದೇಹದ ಮೇಲ್ಭಾಗ ಕಡು ಕಂದು ಅಸ್ಪಷ್ಟವಾಗಿರುವ ಪಟ್ಟಿಗಳು ಕಾಣುತ್ತವೆ. ಎದೆ, ಹೊಟ್ಟೆಯ ತಳ ಭಾಗ ಮಾಸಲು ಬಿಳಿ ಬಣ್ಣದ್ದು, ಬಲಿಷ್ಠ ಕಾಲುಗಳು ಕೊಂಬೆಯನ್ನು ಬಿಗಿಯಾಗಿ ಹಿಡಿದು ಕುಳಿತುಕೊಂಡಿತ್ತು.

ನಾನು ಒಂದೆರಡು ಫೊಟೋಗಳನ್ನು ತೆಗೆದೆ. ತುಂಬ ಹೊತ್ತು ನೋಡುತ್ತಾ ನಿಂತೆವು ಅದು ಅಲ್ಲಿಯೇ ಕುಳಿತಿತ್ತು. ಮನೆಗೆ ಬಂದು ಹಕ್ಕಿಗಳ ಫೀಲ್ಡ್ ಗೈಡ್ ಪುಸ್ತಕದಲ್ಲಿ ಹುಡುಕಿ ತೆಗೆದು ಓದ್ದಿದ್ದೆವು, ನೋಡಿದ ಎಲ್ಲಾ ಚಹರೆಗಳು ಅದರಲ್ಲಿ ಇದ್ದದ್ದು ಕಾಲರ್ಡ್ ಸ್ಕ್ಯಾಪ್ಸ್-ಔಲ್ ಎಂದು ಖಚಿತವಾಯಿತು. ಮತ್ತೆ ಈ ಹಕ್ಕಿಯ ಕೂಗೂ *"ವೂ. . .ಟ್. . .ವೂ. . .ಟ್. . ."* ಎಂದು ಕೂಗೂತ್ತದೆಯಂತೆ. ಸಾಮಾನ್ಯವಾಗಿ ಎಲ್ಲಾ ಗೂಬೆಗಳಂತೆ ಮರದ ಪೊಟರೆಗಳಲ್ಲಿ ಗೂಡು ಮಾಡಿ ಜನವರಿಯಿಂದ ಏಪ್ರಿಲ್ ತಿಂಗಳುಗಳಲ್ಲಿ ಮೂರು ಅಥವಾ ಐದು ಮೊಟ್ಟೆಗಳಿಟ್ಟು, ಸುಮಾರು ಇಪ್ಪತ್ತಾರು ದಿನಗಳವರಿಗೂ ಕಾವುಕೊಟ್ಟು ಮರಿಮಾಡುತ್ತವೆ. ನಮ್ಮ ರಾಜ್ಯದೆಲ್ಲೆಡೆ ಕಂಡು ಬಂದರೂ ನೋಡಲು ತುಂಬ ವಿರಳ. ನಮಗೂ ಕಂಡಿದ್ದು ಅದೇ ಮೊದಲು ಅದೇ ಕೊನೆಯೂ ಕೂಡ ಮತ್ತೆ ಕಾಣಲೇ ಇಲ್ಲ, ಮುಂದೆ ನೋಡೋಣ!.

- ಅಶ್ವಥ ಕೆ.ಎನ್



# ವಿದ್ಯಾರ್ಥಿಗಾಗಿ ವಿಜ್ಞಾನ

## ❖ ಸಸ್ಯಗಳನ್ನು ಕಾಯುವ ಇರುವೆ ಸೈನ್ಯ



ಮಾವಿನ ಮರದಲ್ಲಿ ಹಣ್ಣು ಕೀಳಲು ಹೋಗಿದ್ದರೆ ನೀವು ಕೆಂಜಗ ಇರುವೆಯ ರುಚಿ ಕಂಡಿರುತ್ತೀರಿ. ಅದೇ ರೀತಿ ಜಾನ್ ಎಂಬ ವಿಜ್ಞಾನಿಯು ಪಾನಾಮಾದ ಮಳೆಕಾಡಿನಲ್ಲಿ ಯಾವುದೋ ಹಕ್ಕಿಯ ಗೂಡಿಗಾಗಿ ಹುಡುಕುತ್ತಿದ್ದ. ಅಲ್ಲಿದ್ದ ಒಂದು ಅಕೇಷಿಯಾ ಮರದ ಕೊಂಬೆಯನ್ನು ಸುಮ್ಮನೆ ಅಲುಗಾಡಿಸಿದ. ಮರದ ಮೇಲಿದ್ದ ನೂರಾರು ಇರುವೆಗಳು ಇವನ ತಲೆಯ ಮೇಲೆ ಉದುರಿ ದಾಳಿ ಮಾಡಿ ಕಚ್ಚಲಾರಂಭಿಸಿದವು.

ಜಾನ್ ತನ್ನ ಶರ್ಟನ್ನು ಬಿಚ್ಚಿ ಎಲ್ಲಾ ಇರುವೆಗಳನ್ನು ಉದುರಿಸಿದ. ಅಷ್ಟರಲ್ಲಿ ಟೈಲರಿಂಗ್ ಮಿಷಿನಲ್ಲಿ ಸೂಜಿ ಚುಚ್ಚುವಂತೆ ಇರುವೆಗಳು ಸಿಕ್ಕ ಸಿಕ್ಕ ಕಡೆಗಳಲ್ಲಿ ಚುಚ್ಚಿ ಚುಚ್ಚಿ ಕಚ್ಚಿ ಹಾಕಿದ್ದವು. ಅವು ಸುಮ್ಮ ಸುಮ್ಮನೆ ಕಚ್ಚುತ್ತಿರಲಿಲ್ಲ . ಭಯಾನಕ ಉರಿಯಿಂದ ಕೂಡಿದ ನೆವೆಯನ್ನು ಸಹಿಸಿಕೊಂಡು ಅವನು ಆ ಇರುವೆಗಳು ಅಕೇಷಿಯಾ ಮರವನ್ನು ಶತ್ರುಗಳಿಂದ ಕಾಪಾಡುತ್ತಿವೆ ಎಂದು ಕಂಡು ಹಿಡಿದ. ಇದೇ ರೀತಿ ಹಲವು ಜಾತಿಯ ಇರುವೆಗಳು, ಅವು ವಾಸಿಸುವ ಮರಗಳ ಎಲೆಗಳನ್ನು ತಿನ್ನಲು ಬರುವ ಕೀಟಗಳನ್ನು, ಮೊಟ್ಟೆ ಇಡಲು ಬರುವ ಚಿಟ್ಟೆಗಳನ್ನು ಕಚ್ಚಿ ಓಡಿಸುತ್ತವೆ. ಮರವನ್ನು ರಕ್ಷಿಸುತ್ತವೆ.

ಆಫ್ರೀಕಾದ ಆಕೇಶಿಯಾ ಮರದಲ್ಲಿ ವಾಸಿಸುವ ಇರುವೆಗಳಂತೂ ಇನ್ನೂ ಭಯಾನಕ. ಅವು ಆನೆ ಜಿರಾಫೆ, ಜಿಂಕೆಗಳು ಮರದ ಎಲೆಗಳನ್ನು ತಿನ್ನಲು ಬಂದರೆ ಆ ಪ್ರಾಣಿಗಳ ಮೂತಿಯ ಮೃದು ಭಾಗಕ್ಕೆ ಕಚ್ಚಿ ಓಡಿಸಿ, ಮರವನ್ನು ರಕ್ಷಿಸುತ್ತವೆ.

ಅಕೇಷಿಯಾ ಮರವೂ ಈ ಇರುವೆಗಳು ಮಾಡುವ ಉಪಕಾರಕ್ಕೆ ಪ್ರತಿಯಾಗಿ ಅವು ಮರದ ಕಾಂಡದಲ್ಲೋ, ಮುಳ್ಳುಗಳಲ್ಲೋ ಗೂಡುಮಾಡಿಕೊಂಡು ವಾಸಮಾಡಲು ಜಾಗ ಕೊಡುತ್ತದೆ. ಕೆಲವೊಮ್ಮೆ ಸಕ್ಕರೆಯಂತಹ ಪಾಕವನ್ನು ಅಲ್ಲಲ್ಲಿ ಸ್ರವಿಸಿ ಇರುವೆಗಳಿಗೆ ಊಟವನ್ನು ಕೊಡುತ್ತವೆ. ಹೀಗೆ ಒಂದನ್ನೊಂದು ಪರಸ್ಪರ ಅವಲಂಬಿಸಿಕೊಂಡು ಬದುಕುತ್ತಿವೆ.



- ಶಂಕರಪ್ಪ ಕೆ.ಪಿ






ನಮಗೆಲ್ಲ, ಒಂದು ಕಲ್ಲು ಕೇವಲ ಕಲ್ಲೇ ಆಗಿರುತ್ತದೆ. ಅದನ್ನು ನಾವು ನಮ್ಮ ಆಟದಲ್ಲಿ ಬಳಸಿಕೊಳ್ಳುತ್ತೇವೆ. ಆದರೆ ಸೂಕ್ಷ್ಮಾಣು ಜೀವಿಗಳಿಗೆ ಇವು ಶಕ್ತಿಯ ಆಗರವೇ ಸರಿ ಎಂದರೆ ನಂಬುತ್ತೀರಾ!. ಸೂಕ್ಷ್ಮಾಣು ಜೀವಿಗಳು ಸೂಕ್ಷ್ಮದರ್ಶಕದಲ್ಲಿ ಮಾತ್ರ ಗೋಚರಿಸುವ ಜೀವಿಗಳು. ಭೂಮಿಯ ಆಳದಲ್ಲಿ ಖನಿಜಗಳ ಜೊತೆಗೆ ಸೇರಿ ಜಲಜನಕವನ್ನು ಉತ್ಪಾದಿಸುತ್ತವೆಂದು ವಿಜ್ಞಾನಿಗಳು ಹೇಳಿದ್ದಾರೆ, ಈ ಜಲಜನಕವನ್ನು ಆಧಾರವನ್ನಾಗಿಸಿಕೊಂಡು ಅದರಿಂದ ಶಕ್ತಿ ಪಡೆದು ಸೂಕ್ಷ್ಮಾಣು ಜೀವಿಗಳು ಬದುಕುತ್ತವೆ. ಈ ಸೂಕ್ಷ್ಮಾಣು ಜೀವಿಗಳಿಲ್ಲದೇ ಹೋದರೆ ಜಲಜನಕ ಉತ್ಪಾದನೆಯಾಗುವುದಿಲ್ಲವಂತೆ.

ಸೂಕ್ಷ್ಮಾಣು ಜೀವಿಗಳು ಹೇಗೆ ಭೂಮಿ ಮೇಲೆ ಮತ್ತು ಅಂತರಾಳದಲ್ಲಿ ಜೀವಿಸುತ್ತವೆ ಎಂದು ವಿಜ್ಞಾನಿಗಳು ಯೋಚಿಸುತ್ತಿದ್ದರು. ಹೆಚ್ಚು ಒತ್ತಡ ಮತ್ತು ಶಾಖದ ವಾತಾವರಣದಲ್ಲಿಯೂ ಸೂಕ್ಷ್ಮಾಣುಜೀವಿಗಳು ಬದುಕುತ್ತವೆಂದು ಕಂಡು ಹಿಡಿದರು.



ಸೂಕ್ಷ್ಮಾಣು ಜೀವಿಗಳು ಭೂಮಿಯ ಮೇಲೆ ಜೀವಿಸುವುದಕ್ಕಿಂತ, ಒಳ ಭಾಗದಲ್ಲಿ ಹೆಚ್ಚಾಗಿ ಜೀವಿಸುತ್ತವೆ. ವಿಜ್ಞಾನಿಗಳು, ಸೂರ್ಯನ ಶಾಕವೇ ಹೋಗದಂತಹ ಸ್ಥಳದಲ್ಲಿ ಹೇಗೆ ಮತ್ತು ಯಾವ ರೀತಿಯಾಗಿ ಇವು ಬದುಕುತ್ತಿವೆಯೆಂದು ಪರಿಶೀಲಿಸುತ್ತಿದ್ದಾರೆ? ಸೂರ್ಯನ ಶಾಕವಿಲ್ಲದೇ ಜೀವಿಗಳು (ಸಸ್ಯಗಳು) ದ್ಯುತಿಸಂಶ್ಲೇಷಣೆ ಕ್ರಿಯೆ ನಡೆಸಲು ಆಗುವುದಿಲ್ಲ, ಆದರೆ ಅವು ಬೇರೆ ಜೀವಿಗಳ ಮೇಲೆ ಅವಲಂಬಿಸಬಹುದು.

ಒಬ್ಬ ವಿಜ್ಞಾನಿ ಹೇಳುತ್ತಾರೆ-ಬೇರೆ ಗ್ರಹಗಳಲ್ಲೂ ಇದೇ ರೀತಿ ಗ್ರಹದ ಒಳಭಾಗದ ಪ್ರಪಂಚವಿರಬಹುದು. ಆದರೆ ಅವುಗಳನ್ನು ನೋಡಲು ಅಲ್ಲಿ ನೆಲವನ್ನು ಅಗೆಯಬೇಕು.

ವಿಜ್ಞಾನಿಗಳು ಮೊದಲು ಮಾಡಿರುವ ಪ್ರಯೋಗಗಳಲ್ಲಿ ಸೂಕ್ಷ್ಮಾಣುಜೀವಿಗಳು ಸಮುದ್ರತಳದಲ್ಲಿರುವ ಕೊಳೆತ ಸಸ್ಯ/ಪ್ರಾಣಿಗಳಿಂದ (ಜೈವಿಕ)ಶಕ್ತಿ ಪಡೆದು ಬದುಕುತ್ತವೆ ಎಂದು ಅಭಿಪ್ರಾಯಪಟ್ಟಿದ್ದರು. ಆದರೆ ಖನಿಜಗಳು (ಜೀವವಿಲ್ಲದಿರುವಂತಹ ವಸ್ತುಗಳು) ಸೂಕ್ಷ್ಮಾಣುಗಳಿಗೆ ಆಹಾರ ಒದಗಿಸುತ್ತವೆ ಎಂದೂ ಕೂಡ ತಿಳಿಯಿತು.

ಕೆಲವು ವಿಜ್ಞಾನಿಗಳು ಒಂದು ಮಿಶ್ರಣದಲ್ಲಿ ಸ್ವಲ್ಪ ಖನಿಜಗಳು, ಬೆಣಚುಕಲ್ಲು ಮತ್ತು ಕಪ್ಪುಶಿಲೆ (quartz and basalt) ಬೆರೆಸಿ, ಮತ್ತೊಂದು ಇದೇ ಮಿಶ್ರಣಕ್ಕೆ ಸೂಕ್ಷ್ಮಾಣುಗಳನ್ನು ಸೇರಿಸಿದಾಗ, ಸೂಕ್ಷ್ಮಾಣು ಜೀವಿಗಳು ಬೆರೆತಿರುವ ಮಿಶ್ರಣದಲ್ಲಿ ಮಾತ್ರ ಜಲಜನಕ ಉತ್ಪಾದನೆಯಾಗುವುದೆಂದು ತಿಳಿಯಿತು.

- ಶ್ವೇತಾ .ಆರ್






## * ಹಳದಿ ಕಿತ್ತಳೆ ತುದಿ

ಸುಮಾರು ವರ್ಷದ ಮಾತು, ನಾನು ಪ್ರೈಮರಿ ಸ್ಕೂಲ್ ಗೆ ಒಂದು ಕಿ.ಮೀ ನಡೆದುಕೊಂಡೇ ಹೋಗ್ಬೇಕಿತ್ತು. ದಾರೀಲಿ ಈ ಸತ್ತೋದ್ ಚಿಟ್ಟೆ ಪುಕ್ಕದ ಮೇಲೆ ಇರುವ ಬೂದಿನ ಹಣೇಗ್ ಇಟ್ಕೊಂಡ್ರೆ ಮುಂದೆ ಕಾಸ್ ಸಿಕ್ತದೆ ಅನ್ನೋದನ್ನು ಯಾರು ಹೇಳಿದ್ರೋ ಗೊತ್ತಿಲ್ಲ, ಅದು ಬಾಯಿಂದ ಬಾಯಿಗೆ ಹರಡಿ ನಮ್ ಕಿವಿಗೂ ಬಂದು, ಸಿಕ್ಕ ಚಿಟ್ಟೆ ರೆಕ್ಕೆ ಬೂದಿನ ಹಣೆಗೆ ಇಟ್ಕ್ಕೋತಿದ್ದವಿ, ಆದ್ರೆ ನನಗಂತೂ ಯಾವತ್ತೂ ಕಾಸ್ ಸಿಕ್ಕಿಲ್ಲ! ಆದ್ರೂ ನಂಬಿಕೆ ನೋಡಿ ಬಿಡಾಕಾಗೊಲ್ಲ ಇರ್ಲಿ ಅಂತ ನಾನು ಹಣೆಗೆ ಇಟ್ಕ್ಕೋತಿದ್ದೆ.




ಒಮ್ಮೆ ಶಾಲೆಗೆ ಹೋಗ್ ಬೇಕಾದ್ರೆ ಜೇಬಲ್ಲಿ ಕಾಸ್ ಇಲ್ಲದಿದ್ದಾಗ ನೆನಪಿಗೆ ಬಂದಿದ್ದು ಚಿಟ್ಟೆ! ದಾರಿ ಉದ್ದಕ್ಕೂ ಚಿಟ್ಟೆ ಹುಡುಕುತ್ತಾ ಹೊರಟೆ, ಸತ್ತಿದ್ದು ಸಿಕ್ಕಿಲ್ಲಾ ಅಂದ್ರೆ ಬದುಕಿರೊ ಚಿಟ್ಟೆನೇ ಹೊಡೆಯೋಣ ಅಂತ ಕೈಯಲ್ಲಿ ಅಂಟ್ರಾಣಿಗಿಡದ ಎರಡು ರೆಂಬೆ ಹಿಡಿದು ಹುಡುಕ್ತಾ ಬಂದಾಗ ಅಲ್ಲೆ ಪಕ್ಕದಲ್ಲಿದ್ದ ಲಂಟಾಣಿ ಗಿಡದ ಹೂವಿನ ಮೇಲೆ ಕೂತಿದ್ದ ಚಿಟ್ಟೆನ ನೋಡಿ ರಪ್.... ಅಂತ ಹೊಡೆದೆ, ಹೊಡೆದ ಏಟಿಗೋ ಅಥವಾ ರಭಸಕ್ಕೋ ಚಿಟ್ಟೆ ಮೂರ್ಛೆ ಹೋದಂತೆ ಬಿದ್ದಿತು, ಅದನ್ನ ಕೈಯಲ್ಲಿ ಹಿಡಿದುಕೊಂಡು ಬೂದಿನ ಹಣೆಗ್ ಇಟ್ಕೊಂಡು ಎಲ್ಲೆಲ್ಲಿ ಏಟಾಗಿದೆಯೋ ಅಂತಾ ಸೂಕ್ಷ್ಮವಾಗಿ ಗಮನಿಸುತ್ತ ಅದನ್ನು ಎಡಗೈನ ಅಂಗೈಯಲ್ಲಿ ಇಟ್ಟಿದ್ದೇ ತಡ ಪುರ್ ಅಂತ ಹಾರ್ ಹೋಯ್ತು. ಆ ಚಿಟ್ಟೆ ನೋಡೋಕೆ ಹಳದಿ ಯಾಗಿತ್ತು. ಅದರ ಹೆಸರೇ ಹಳದಿ ಕಿತ್ತಳೆ ತುದಿಯಂತೆ!.

ಸಾಧಾರಣವಾಗಿ ಭಾರತ, ಶ್ರೀಲಂಕಾ, ಪಾಕಿಸ್ಥಾನ, ನೇಪಾಳ್, ಬಾಂಗ್ಲಾದೇಶ, ಮಯಾನ್ಮಾರ್ಗಳಲ್ಲಿ ಹೆಚ್ಚಾಗಿ ಕಾಣಸಿಗುತ್ತವೆ. ಕುರುಚಲು ಮತ್ತು ಪೊದೆ ಕಾಡುಗಳಲ್ಲಿ ಕಾಣಸಿಗುವ ಈ ಚಿಟ್ಟೆಗಳು, ತೆರೆದ ಪ್ರದೇಶಗಳಲ್ಲಿ ಕಾಣಿಸುವುದು ವಿರಳ. ವಿಶೇಷವೆಂದರೆ ಹಿಮಾಲಯದ 2100 ಮೀ ಎತ್ತರದಲ್ಲೂ ಹಾಗೂ ದಕ್ಷಿಣ ಭಾರತದಲ್ಲಿನ 1800 ಮೀ ಎತ್ತರದಲ್ಲೂ ಈ ಚಿಟ್ಟೆ ಕಾಣಸಿಗುತ್ತವೆ.

50-70 ಮಿ ಮೀ ಉದ್ದದ ರೆಕ್ಕೆಯನ್ನು ಹೊಂದಿರುವ ಇವು, ಅತೀ ವೇಗವಾಗಿ ಹಾರಬಲ್ಲವು ಹಾಗೂ ತೇವಾಂಶವಿರುವ ಜಾಗ ಮತ್ತು ಕೆರೆ ಹಳ್ಳಕೊಳ್ಳಗಳಲ್ಲಿ ಹೆಚ್ಚಾಗಿ ಕಾಣಿಸುತ್ತವೆ. ಗಂಡು ಮತ್ತು ಹೆಣ್ಣು ಚಿಟ್ಟೆಗಳು ನೋಡಲು ಬಣ್ಣದಲ್ಲಿ ವ್ಯತ್ಯಾಸಗಳಿವೆ. ಸಾಮಾನ್ಯವಾಗಿ ಗಂಡು ಚಿಟ್ಟೆಗಳ ಮೇಲ್ಮೈ ಹಳದಿ ಬಣ್ಣದಲ್ಲಿದ್ದು ಮುಂದಿನ ರೆಕ್ಕೆಯಲ್ಲಿ ಕಿತ್ತಳೆ ಬಣ್ಣದ ಪಟ್ಟಿಯನ್ನು ಕಾಣಬಹುದು. ಹಾಗೂ ಹಿಂಬದಿಯ ರೆಕ್ಕೆಯಲ್ಲಿ ಕಪ್ಪು ಬಣ್ಣದ ಪಟ್ಟಿಯನ್ನು ಕಾಣಬಹುದು. ಹಾಗೂ ರೆಕ್ಕೆಗಳ ಕೆಳ ಭಾಗ ಹಳದಿ ಮಿಶ್ರಿತ ಕಂದು ಬಣ್ಣವಿರುತ್ತದೆ.

ಹೆಣ್ಣು ಚಿಟ್ಟೆಗಳ ರೆಕ್ಕೆಯ ಮೇಲ್ಮೈ ಬಿಳಿ ಅಥವಾ ಹಳದಿ ಬಣ್ಣವಿರುತ್ತದೆ, ಬಿಳಿಬಣ್ಣದ ಚಿಟ್ಟೆಗಳಲ್ಲಿ ಬಿಳಿಬಣ್ಣದ ಪಟ್ಟಿ ಇರುತ್ತದೆ. ಹಳದಿ ಬಣ್ಣದ ಹೆಣ್ಣು ಚಿಟ್ಟೆಗಳಲ್ಲಿ ಪಟ್ಟಿ ಸಣ್ಣದಾಗಿದ್ದು ಎರಡು ಕಪ್ಪು ಚುಕ್ಕೆಗಳಿರುತ್ತವೆ.

ಭಾರತದ ದಕ್ಷಿಣಭಾಗದಲ್ಲಿ ಬಿಳಿಬಣ್ಣದ ಹೆಣ್ಣು ಚಿಟ್ಟೆಗಳು ಕಾಣಸಿಕ್ಕರೆ, ಉಳಿದೆಲ್ಲಾ ಕಡೆ ಹಳದಿ ಬಣ್ಣದ ಹೆಣ್ಣು ಚಿಟ್ಟೆಗಳನ್ನು ನೋಡಬಹುದು.

- ಮಹದೇವ ಕೆ.ಸಿ



**ಕಾನನದ ಹುಟ್ಟು ಹಬ್ಬಕ್ಕೆ ವಿಶೇಷ ಪ್ರಕಟಣೆ**

ಕಾನನ ಪತ್ರಿಕೆಯ ಮೂರನೇ ವರುಷ ಮುಗಿಸಿ ನಾಲ್ಕನೇ ವರ್ಷಕ್ಕೆ ಕಾಲಿಡುತ್ತಿರುವುದು ಸಂತೋಷದಾಯಕವಾಗಿದೆ. ನಾಲ್ಕನೇ ವರುಷಕ್ಕೆ ಕಾಲಿಟ್ಟ ಈ ಸಂದರ್ಭದಲ್ಲಿ ಒಂದು ಸಣ್ಣ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಹಿಂದಿನ ಸಂಚಿಕೆಯಲ್ಲಿ ಪ್ರಕಟಗೊಂಡಂತೆ“ **ಅಂತರಾಷ್ಟ್ರೀಯ ಪರ್ವತ ದಿನ** ” ವನ್ನು ಕಾನನ ತಂಡ ಅಳಿಲು ಸೇವೆಯಂತೆ ಸಣ್ಣದಾಗಿ ಒಂದು **ಶ್ರಮದಾನ ಕಾರ್ಯಕ್ರಮವನ್ನು** ಹಮ್ಮಿಕೊಂಡಿದೆ. **ರಾಮಕೃಷ್ಣ ಮಿಷನ್, ಶಿವನಹಳ್ಳಿಯ** ಗುಡ್ಡಗಳಲ್ಲಿ ನೆಟ್ಟಿರುವ ಸಸ್ಯಗಳಿಗೆ ಈ ಬೇಸಿಗೆಯಲ್ಲಿ ನೀರೆರೆಯುವ ಕಾರ್ಯಕ್ರಮವನ್ನು ಜನವರಿ ತಿಂಗಳ ಪ್ರತಿ ಭಾನುವಾರದಂದು ಅಯೋಜಿಸಿದೆ. ಕಾನನ ಓದುಗರು ಈ ಸೇವೆ ಮಾಡುವುದಕ್ಕೆ ಪಾಲ್ಗೋಳಬಹುದು. ಭಾಗವಹಿಸುವವರು ತಿಂಗಳ ಯಾವ ದಿನಾಂಕದ ಭಾನುವಾರದಂದು ಬರಲು ಇಚ್ಚಿಸುವವರು ತಮ್ಮ ಹೆಸರು, ಊರು, ಮತ್ತು ಫೋನ್ ನಂಬರ್ ಇತ್ಯಾದಿ ಮಾಹಿತಿಗಳೊಂದಿಗೆ kaanana.mag@gmail.com ಇ-ವಿಳಾಸಕ್ಕೆ ಅಥವಾ +91 9035985874 ಫೋನ್ ನಂಬರ್ಗೆ ತಮ್ಮ ಬರುವಿಕೆಯನ್ನು ನಾಲ್ಕುದಿನದ ಮುಂಚಿತವಾಗಿ ಗಟ್ಟಿಗೊಳಿಸಿಕೊಳ್ಳಬಹುದು.

# ಪ್ರಕೃತಿ

ಸುತ್ತಲು ಎತ್ತ ನೋಡಿದರು
ಕಣ್ಣು ಕುಕ್ಕುವ ಹಚ್ಚ ಹಸಿರು
ಅದೇ ವನ್ಯ ಜೀವಿಯ ಉಸಿರು.

ಕತ್ತಲಂತೆ ಹಬ್ಬಿರುವ ಮೋಡಗಳು
ಸಣ್ಣದಾಗಿ ನೆಲ ಸ್ಪರ್ಶಿಸುತ್ತಿರುವ ಹನಿಗಳು
ತುಂಬಿ ಹರಿಯುತ್ತಿರುವ ನದಿಗಳು.



ನೀರಲಿ ಮೀನು ಕಪ್ಪೆಗಳ ಮರಿ
ಮರಿಗಳು ಹೊರ ಬರುವುದು
ನೋಡಲು ಬಲು ಚಂದ.

ತುಂತುರು ಹನಿಯಿಂದ
ನೆಂದಿರುವ ಪ್ರಾಣಿಗಳು
ನೋಡಲು ಬಲು ಚಂದ.

ಒಣಗಿದ ಮರಗಳು
ಚಿಗುರಿ ಬೆಳೆವುದನು
ಕಾಣಲು ಬಲು ಸೊಗಸು.

ಚಂಗನೆ ಜಿಗಿಯುತ
ಸಂತಸದಿ ಓಡುವ ಜಿಂಕೆಯ
ನೋಡಲು ಬಲು ಸೊಗಸು.

- ಧನರಾಜ್ .ಎಂ

